Each one of us is Responcible for Everything and to Every human being.

–Dastoevsky

---

# ಸಂಚಯ

ಕಲಾಸಕ್ತರ ದ್ವೈಮಾಸಿಕ

ಸಂಪುಟ : 5 (ಖಾಸಗಿ ಪ್ರಸಾರಕ್ಕಾಗಿ) ಏಪ್ರಿಲ್ 1991

ಸಂಚಿಕೆ : 1

---

## ಈ ಸಂಚಯದಲ್ಲಿ



---

ಸಂಪಾದಕರು : ಡಿ. ವಿ. ಪ್ರಹ್ಲಾದ್ ಮತ್ತು ಮಂಡಳಿ

ಪ್ರಕಟಣೆ : 'ಸಂಚಯ' ಬಳಗ

ವಾರ್ಷಿಕ ಚಂದಾ : ರೂ. 25/–

ಮುಖಪುಟ : ಕೆ. ಕೆ. ಹೆಬ್ಬಾರ್ ಅವರ ರೇಖಾ ಚಿತ್ರ

ಕೃಪೆ : ಲಲಿತಕಲಾ ಅಕಾಡೆಮಿ

ಸಂಚಯದ ವಿಳಾಸ : ನಂ. 28, ಮಾರಮ್ಮನ ದೇವಸ್ಥಾನದ ರಸ್ತೆ, 8ನೇ ಕ್ರಾಸ್
ಮಲ್ಲೇಶ್ವರಂ, ಬೆಂಗಳೂರು–560 003

---

# ಯುದ್ಧಗಳು ಮತ್ತು ಕಲಾವಿದ

ರವಿಕುಮಾರ ಕಾಶಿ

ಘಟನೆಯೊಂದರ ಪರಿಕಲ್ಪನೆಗಳನ್ನು ಕಲೆ ಹೇಗೆ ಬದಲಿಸಬಲ್ಲುದು ಎಂಬುದಕ್ಕೆ ಯುದ್ಧದ ಕಲ್ಪನೆಯನ್ನು ಕಲೆ ಹೇಗೆ ತಿರುಚಿದೆ ಎಂಬುದೇ ಸಾಕ್ಷಿ. ಯುದ್ಧವನ್ನು ಅಸಂಖ್ಯ ಮುಗ್ಧ ಜನರ ಸಾವು ನೋವಿಗೆ ಕಾರಣವಾಗುವ ಕ್ರೌರ್ಯ, ಬರ್ಬರತೆ ಎಂಬುದಾಗಿ ಗುರುತಿಸಲಿಕ್ಕೆ ಅಲ್ಪ ನಿವೃತ್ತಿ ಸಾಕು. ಯುದ್ಧವನ್ನು ದೇಶಭಕ್ತಿಯ ಹೆಸರಲ್ಲೋ, ಇನ್ನಾವುದೋ ಉತ್ತುಂಗ ಆಧ್ಯಾತ್ಮ ತತ್ವದ ಹೆಸರಲ್ಲಿ ಮಾಡಿದರೂ ನಿರ್ಲಜ್ಜ ಕೊಲ್ಲುವಿಕೆಯೇ ಯುದ್ಧದ ಕೇಂದ್ರವಾಗುತ್ತದೆ. ಅಷ್ಟಿದ್ದೂ ಅನಾದಿಯಿಂದ ಇಂದಿನವರೆಗಿನ ಚಿತ್ರ, ಶಿಲ್ಪ, ಗೇಯಗಳಲ್ಲಿ ನಾವು ಯುದ್ಧವು ವೈಭವೀಕೃತವಾಗುವುದನ್ನು ಕಂಡಿದ್ದೇವೆ. ಯಾವುದು ಕ್ರೌರ್ಯವಾಗಿ ತುಚ್ಛವಾಗಬೇಕಿತ್ತೋ ಅದು ಕಲಾವಿದನ ಕುಶಲತೆಯಿಂದ ವೀರರಸವಾಗುತ್ತದೆ. ಅಪರೂಪಕ್ಕೆ ಯುದ್ಧವನ್ನು ಕ್ರೌರ್ಯವಾಗಿ ತೋರಿದಲ್ಲಿಯೂ ಸಹ ಅದು ಕಲಾವಿದನ ಪರವಾದ ಜನರ ಮೇಲೆ ಇತರ ಜನಾಂಗದವರಿಂದ ನಡೆದ ಆಕ್ರಮಣವಾಗಿರುತ್ತದೆ. ಹಾಗಾಗಿ ಕಲಾವಿದನ ಕಡೆಗಾಗಿ ವೀರಾವೇಶದಲ್ಲಿ ಹೋರಾಡಿ ಮಡಿದ ಹುತಾತ್ಮರ ವೈಭವೀಕರಣಕ್ಕೆ ಕಳೆಯೇರುತ್ತದೆ. ಕಲಾವಿದ ಜನಜಂಗುಳಿಯ ಆವೇಶಕ್ಕೆ ತನ್ನ ಕಲೆಯನ್ನು ಈಡು ಮಾಡುತ್ತಾನೆ.

ಬಹುಶಃ ಯುದ್ಧವನ್ನು ಅದರ ಕ್ರೌರ್ಯ, ಬರ್ಬರತೆಯೊಂದಿಗೆ ತೋರಿದ ಕಲಾವಿದನೆಂದರೆ ಗೋಯ. ಆತನ ಚಿತ್ರಗಳು ಫ್ರೆಂಚರಿಂದ ತನ್ನ ಸ್ಪೇನಿನ ಜನರಿಗಾದ ಕ್ರೌರ್ಯವನ್ನು ಚಿತ್ರಿಸುತ್ತವೆ. ಇಲ್ಲಿ ಯುದ್ಧದ ಸಂಗಾತಿಯಾಗಿರುವ ಕ್ರೌರ್ಯದ ನೇರ ಸರಳ ಚಿತ್ರಣವಿದೆ. ಮೊದಲಲ್ಲಿ ಗೋಯಾನಿಗೆ ಫ್ರೆಂಚರು ಕ್ರಾಂತಿಯ ತತ್ವಗಳನ್ನು ಅಷ್ಟಿಷ್ಟು ತನ್ನ ನಾಡಿಗೂ ತಂದಾರೆಂದು ಸಹಾನುಭೂತಿ ಇತ್ತೇನೋ. ಆದರೆ ಸ್ಪೇನಿನ ದೇಶಭಕ್ತರ ಮೇಲೆ ನಡೆದ ಬರ್ಬರತೆಯು ಈ ಕಲ್ಪನೆ ಕುಸಿಯುವಂತೆ ಮಾಡಿತು. ಅಲ್ಲಿ ಸ್ಪೇನರ ಕಗ್ಗೊಲೆ ನಡೆಸುವಾಗ ಕ್ರಾಂತಿಪರ ಫ್ರೆಂಚರು ಯಾವ ಭೇದವನ್ನೂ ಎಣಿಸಲಿಲ್ಲ.

ಹಾಗಿದ್ದೂ, ಗೋಯಾನ ಚಿತ್ರಗಳಲ್ಲಿ ನಾಟಕೀಯತೆಯೆಂಬುದು ಉಳಿದು ಬಿಡುತ್ತದೆ. ವೀಕ್ಷಕನು ಬರ್ಬರತೆಯನ್ನು ಭಾವಿಸಬಲ್ಲನಾದರೂ ಅದು ಆತನ ನೇರ, ವೈಯಕ್ತಿಕ ಅನುಭವವಾಗುವುದಿಲ್ಲ. ಅದೇಕೋ ಈ ಸಾಮುದಾಯಿಕ ಅಪರಾಧವು ನಮ್ಮ ಮನಸ್ಸಿನಲ್ಲಿ ತನ್ನ ನೀಚತ್ವವನ್ನು ಕಳೆದುಕೊಳ್ಳುತ್ತದೆ.

ನಮ್ಮ ಮನೆ ಬಾಗಿಲ ಮುಂದೆ ಬಿದ್ದ ಹೆಣವೊಂದು, ದೂರದಲ್ಲೆಲ್ಲೋ ಆಗುವ ಸಾವಿರಾರು ಸಾವುಗಳಿಗಿಂತಲೂ ಹೆಚ್ಚಿನ ತೀವ್ರತೆಯನ್ನು ಗಳಿಸುತ್ತದೆ. ನಮ್ಮ, ಸಮಕಾಲೀನ ಕಲೆಯಲ್ಲಿನ, ಎಲ್ಲ ಅನುಭವಗಳನ್ನೂ ತನ್ನದಾಗಿಸಿಕೊಳ್ಳುವ ಕಲಾವಿದನ ಪ್ರವೃತ್ತಿಯಂತೆ ಯುದ್ಧದ ಬರ್ಬರತೆ, ಹತ್ಯೆಗಳೂ ವೈಯಕ್ತಿಕ ಅನುಭವವಾಗುತ್ತದೆ. ಯುದ್ಧದಿಂದ ನುಚ್ಚು ನೂರಾಗುವ ಜಗತ್ತು, ಕಲಾವಿದನ ಕಂಗಳಿಂದ ಕಂಡ ವೈಯಕ್ತಿಕ ಜಗತ್ತಾಗುತ್ತದೆ. ಇಂತಹ ಅನೇಕ ನವ್ಯ ಕೃತಿಗಳಿಂದ ನಮಗೆ ನಮ್ಮಲ್ಲಿ ಒಬ್ಬೊಬ್ಬರ ಒಡನೆಯೂ ನಿರಂತರ ಇರುವ ದುಃಸ್ವಪ್ನದ ಅರಿವಾಗುತ್ತದೆ. ಹಾಗಾಗಿ ಪಿಕಾಸೋನ "ಗೆರ್ನಿಕಾ" ಕೃತಿಯಲ್ಲಿ ಚಿತ್ತಾಗುವ, ಚಿತೆಯೇರುವ ಜಗತ್ತು ನಮ್ಮದೇ ಆಗುತ್ತದೆ. ಅಲ್ಲಿ ಕುಸಿಯುತ್ತಿರುವ ಶತಮಾನಗಳಿಂದ ರಕ್ಷಿಸಲ್ಪಟ್ಟಿದ್ದ ಮೌಲ್ಯಗಳು, ನಂಬುಗೆಗಳು, ಮಾನವೀಯತೆ ನಮ್ಮದಾಗುತ್ತದೆ. ಅಲ್ಲಾಗುತ್ತಿರುವುದು ಕೇವಲ ಕೆಲವು ವ್ಯಕ್ತಿಗಳ ಸಾವಾಗದೆ, ವಿವೇಕಪೂರ್ಣ ಜಗತ್ತಿನ ಕೊನೆಯಾಗುತ್ತದೆ.

ಪಿಕಾಸೋನ "ಗೆರ್ನಿಕಾ" ಕುರಿತು ಜಾನ್‌ಬರ್ಗರ್ ಬರೆದ ಮಾತುಗಳಿವು :

"ಗೆರ್ನಿಕಾ" ಒಂದು ಮನಸ್ಸಂಬಂಧವಾದ ಕೃತಿ – ಮತ್ತು ಇದರಿಂದಲೇ ಅದು ತನ್ನೆಲ್ಲ ಶಕ್ತಿಯನ್ನು ಪಡೆದುಕೊಂಡಿದೆ. ಪಿಕಾಸೋ ತನ್ನ ನೈಜ ಘಟನೆಯನ್ನು ಕಲ್ಪಿಸಿಕೊಳ್ಳುವ ಯತ್ನ ಮಾಡಲಿಲ್ಲ. ಅಲ್ಲಿ ನಗರವಿಲ್ಲ, ಏರೋಪ್ಲೇನುಗಳಿಲ್ಲ, ಯಾವ ಬಾಂಬಿನ ಸಿಡಿತವೂ ಇಲ್ಲ, ಯಾವಾಗ ಯಾವ ವರ್ಷ ಯಾವ ದಿನ ನಡೆಯಿತೆಂಬ ಬಗ್ಗೆ ಅಥವಾ ಅದು ಎಲ್ಲಿ ಸ್ಪೇನಿನ ಯಾವ ಭಾಗದಲ್ಲಿ ನಡೆಯಿತೆಂಬುದರ ಬಗ್ಗೆ ಸಹ ಉಲ್ಲೇಖವಿಲ್ಲ. ಅಲ್ಲಿ ಟೀಕಿಸಲು ಶತ್ರುಗಳಿಲ್ಲ, ವೀರಾವೇಶದ ವೀರರಿಲ್ಲ, ಅಷ್ಟಿದ್ದೂ ಈ ಕೃತಿಯೊಂದು ಪ್ರತಿಭಟನೆ–ಮತ್ತು ಇದರ ಇತಿಹಾಸ ಗೊತ್ತಿಲ್ಲದಿದ್ದವರೂ ಸಹ ಇದನ್ನೇ ಭಾವಿಸಬಲ್ಲರು. ಹಾಗಾದರೆ ಇದರ ಪ್ರತಿಭಟನೆ ಎಲ್ಲಿದೆ ?

ಅದು ಅಲ್ಲಿನ ದೈಹಿಕಾಂಗಗಳಿಗೆ–ಕೈಗಳಿಗೆ, ಕಾಲಿನ ಪಾದಗಳಿಗೆ, ಕುದುರೆಯ ನಾಲಿಗೆಗೆ, ತಾಯಿಯ ಮೊಲೆಗಳಿಗೆ ಆಗಿರುವ ವಿಕಾರದಲ್ಲಿದೆ. ಅದನ್ನು ಚಿತ್ರಿಸುವಾಗ ಏನಾಗಿದೆಯೆಂಬುದು, ನೈಜ ಘಟನೆ ನಡೆಯುವಾಗ ದೇಹಕ್ಕೆ ಏನಾಯಿತೆಂಬುದರ ಕಾಲ್ಪನಿಕ ಸಾಮ್ಯವಾಗುತ್ತದೆ. ನಮಗೆ ನೋವಿನ ಅನುಭವ ನಮ್ಮ ಕಣ್ಣುಗಳಿಂದಾಗುತ್ತದೆ ಮತ್ತು ನೋವೆಂಬುದು ದೇಹದ ಪ್ರತಿಭಟನೆ."

ಹಾಗಾಗಿ ಚಿತ್ರವು ಸಂಪೂರ್ಣ ಅವಿವೇಕದ, ಕಗ್ಗೊಲೆಯ, ಅಂಗಚ್ಛೇದದ ಸಂಕೇತವಾಗುತ್ತದೆ. ಚಿತ್ರವನ್ನು ನೋಡುವ ನಾವು ದೂರದ ದುರಂತವೊಂದರ ವೀಕ್ಷಕರಾಗದೆ, ಭಾಗಿಗಳಾಗುತ್ತೇವೆ.

ತನ್ನ "ಅಂತರ್ಯುದ್ಧದ ಮುನ್ಸೂಚನೆ" ಎಂಬ ಕೃತಿಯಲ್ಲಿ ಸಾಲ್ವಡೇರ್ ಡಾಲಿಯೂ ಸಹ ಇಂಥದೇ ದುಃಸ್ವಪ್ನವು ನಮ್ಮನ್ನು ವೈಯಕ್ತಿಕವಾಗಿ ತಟ್ಟಬಲ್ಲ ಸಂಕೇತದೊಂದಿಗೆ ಚಿತ್ರಿಸುತ್ತಾನೆ. ಈ ಚಿತ್ರಕ್ಕೆ ಆತ "ಬೇಯಿಸಿದ ಬಟಾಟೆಯಿಂದ ಮಾಡಿದ ಮೃದು ರಚನೆ" ಎಂಬ ವಿಚಿತ್ರ ಹೆಸರನ್ನೂ ಸಹ ಕೊಟ್ಟಿದ್ದಾನೆ. ಮೊದಲ

ನಾಮಕರಣದಿಂದ ಅವನ ಉದ್ದೇಶವು ಸ್ಪಷ್ಟವಾಗುತ್ತದೆ. ಚಿತ್ರದ ಹಿನ್ನೆಲೆ ಮುನ್ನೆಲೆಗಳು ಡಾಲಿಯ ದೇಶವಾದ ಬೆಳ್ಮುಗಿಲುಳ್ಳ, ನೀಲ ಬಾನು, ಕೆಂಪು ನೆಲ, ಅಲ್ಲಿ ಬಿದ್ದಿರುವ ಕಾಲು, ಕಸ, ಮಲಗಿದ ದೇಹ, ಅದು ಹಿಡಿದ ಅರ್ಧ ಕಾಯ ಮೊದಲಾದುವು ಮಾನವನ ವಾಸ್ತವಿಕ ಅವಯವಗಳನ್ನು, ಅವಾಸ್ತವಿಕವೂ ಭೀತಿ ಕಾರಕವೂ ಆಗಿ ತೋರಿಸಿರುವ ವಿಕೃತಿಗಳು. ಮಾನವ ಕುಲ ಅಂತರ್ಯುದ್ಧದಿಂದ ತನ್ನನ್ನು ತಾನೇ ಹರಿದು ಹಿಚುಕಿ ನಾಶಪಡಿಸುತ್ತದೆ ಎಂಬ ಘೋರ ಸಂದೇಶವನ್ನು ಈ ಚಿತ್ರ ಸಾರುತ್ತದೆ. ಮಾರ್ಕ್ಸ್‌ಬೆಕ್‌ಮ್ಯಾನ್‌ನಂತಹ ಅಭಿವ್ಯಕ್ತಿವಾದಿಗಳೂ ಸಹ ಇಂಥದೇ ಭಾವಗಳನ್ನು ತಮ್ಮ ಸಂಕೇತಗಳಿಂದ ನಮ್ಮಲ್ಲಿ ತರುತ್ತಾರೆ.

ಭಾರತೀಯ ಕಲಾವಿದರಾದ ಸೋಮನಾಥ ಹೋರೆಯವರ "ಗಾಯಗಳು" ಮಾಲಿಕೆಯ ಚಿತ್ರಗಳು ಸಹ ಯುದ್ಧದ ಸುತ್ತ ಹೆಣೆದದ್ದು. ಮಾನವೀಯತೆಯ ಮೇಲೆ ನಡೆವ ಎಲ್ಲ ಅನ್ಯಾಯ, ಅಕೃತ್ಯಗಳ ಬಿಂಬವಾಗಿ "ಗಾಯಗಳು" ನಿಲ್ಲುತ್ತವೆ. ಇಲ್ಲಿ ಘಟನೆಯನ್ನು ವರ್ಣಿಸುವ ಸಾಂದರ್ಭಿಕ, ಸಾಹಿತ್ಯಕ ವಿವರಗಳೆಲ್ಲ—ಬದಲು ಭಾವನೆಗಳನ್ನು ಬಡಿದೆಬ್ಬಿಸಬಲ್ಲ ದೃಶ್ಯ ಬಿಂಬಗಳಿವೆ. ಮೊದಲು ಪ್ಲಾಸ್ಟರ್‌ನಲ್ಲಿ ಅಚ್ಚನ್ನು ಸಿದ್ಧಪಡಿಸಿ ನಂತರ ಪೇಪರನ್ನು ಎರಕ ಹೊಯ್ಯುವ ತಂತ್ರದ ಈ ಉಬ್ಬು ತಗ್ಗುಗಳ ಮೇಲ್ಮೈಯು ನೋಡುತ್ತಾ ಹೋದಂತೆ ಜೀವವನ್ನು ತಳೆಯುತ್ತದೆ. ತೂರಿ ಹೋದ ಗುಂಡಿನಿಂದ ಝಾಲು ಝಾಲಾದ, ಚಾಕುವಿನಿಂದ ಇರಿದು ತೆರೆದ, ಬಾಯ್‌ನೆಟ್ಟುಗಳಿಂದ ತಿವಿದ, ಭಾರದ ಸುತ್ತಿಗೆಗಳಿಂದ ಬಡಿದ, ಸಿಡಿದ ಬಾಂಬಿನ ತುಂಡುಗಳಿಂದಾದ ಗಾಯದಿಂದ ಒಸರುವ ರಕ್ತ-ಕೀವುಗಳ ಚಿತ್ರಣ ಕಾಣತೊಡಗುತ್ತದೆ.

ಕೆ. ಜಿ. ಸುಬ್ರಮಣ್ಯನ್‌ರವರ ಸುಡಾವೆ ಮಣ್ಣಿನ ಕೃತಿಗಳಲ್ಲಿ ಮನುಷ್ಯ ತನ್ನ ದುಷ್ಕರ್ಮದ ತೆವಲಿನ ಪೂರೈಕೆಗೆ ಮನುಷ್ಯನನ್ನೇ ಗಣಿಯಾಗಿಸುವ, ಗುರಿಯಾಗಿಸುವ ಇಂಥ ಕ್ರಿಯೆಗಳಲ್ಲಿ ಸಂತೋಷದಿಂದ ಭಾಗಿಯಾಗುವ ಚಿತ್ರವನ್ನು ನೀಡುತ್ತಲೇ ಮನುಷ್ಯನ ನಶ್ವರತೆಯ ವೈರುಧ್ಯವನ್ನು ತೋರುತ್ತಾ ಹೋಗುತ್ತಾರೆ. ಅದು ಬಾಂಗ್ಲಾ ದೇಶವಿರಬಹುದು, ವಿಯಟ್ನಾಂ ಇರಬಹುದು ಅಥವಾ ಜಗತ್ತಿನ ಇನ್ನಾವುದೇ ಭಾಗವಿರಬಹುದು. ತನ್ನ ಅಮಾನವೀಯ ಜಯಗಳಲ್ಲಿ ಹಿಗ್ಗಿ ಪದಕಗಳನ್ನು ಧರಿಸಿ ಕುಪ್ಪಳಿಸುವವ ನೋವಿನೆದುರಲ್ಲಿ ನಿಸ್ಸಹಾಯಕನಾಗಿ ಸೋಲುವುದನ್ನು ಮಾರ್ಮಿಕವಾಗಿ ತೋರುತ್ತಾರೆ.

ಜಗದ್ವಿನಾಶದ ಅಣುಸಮರದ ಭೀತಿಯಲ್ಲಿರುವ ನಮಗೆ ಎಂದಿಗಿಂತ ಇಂದು ಇಂಥ—ಯುದ್ಧದ ವೈಭವೀಕೃತ ಸಿಹಿಯನ್ನು ಇಲ್ಲವಾಗಿಸಿ, ಯುದ್ಧದ ಕ್ರೌರ್ಯ ಬರ್ಬರತೆಯನ್ನು ತೋರಿಸುವ, ಯುದ್ಧ ಎಂಬ ವ್ರಣವನ್ನು ತೋರಿಸಿ ಜನರಲ್ಲಿ ನಾವೆಂಥ ಅವಿವೇಕದೆಡೆ, ವಿನಾಶದೆಡೆ ಸಾಗುತ್ತಿದ್ದೇವೆಂಬ ಅರಿವು ಮೂಡಿಸಬಲ್ಲ ಚಿತ್ರ, ಶಿಲ್ಪ, ಸಾಹಿತ್ಯ ಕಲಾಕೃತಿಗಳು ಬೇಕಾಗಿದೆ, ವಿಪುಲ........

— o —

# ಇತ್ತೀಚೀನ ಕನ್ನಡ ಕಾವ್ಯ; ಕೆಲವು ಟಿಪ್ಪಣಿಗಳು

ಎನ್. ಎಸ್. ಶ್ರೀಧರಮೂರ್ತಿ

1

ಇತ್ತೀಚಿನ ಕನ್ನಡ ಕಾವ್ಯದ ಕುರಿತು ನಮ್ಮಲ್ಲಿ ಅನೇಕರಿಗೆ ಭರವಸೆ ಇದೆ. ಆಧುನಿಕ ಕನ್ನಡ ಕಾವ್ಯ ಒಂದು ಹೊಸ ಚಾಲನೆಯಲ್ಲಿದೆ. ಹಾಗೆ ನೋಡಿದರೆ ಇಂತಹ ಚಾಲನೆ ಸಾಧ್ಯತೆ ಕಳೆದ ದಶಕದುದ್ದಕ್ಕೂ ನೆಲೆಯನ್ನು ಪಡೆದುಕೊಳ್ಳಲು ಪ್ರಯತ್ನಿಸುತ್ತಲೆ ಬರುತ್ತಿದೆ. ಬಂಡಾಯ ದಲಿತ ಚಳುವಳಿಗಳ ಜನಪರ ನಿಲುವು, ನವ್ಯತೆ ಕಲಿಸಿಕೊಟ್ಟ ಸೂಕ್ಷ್ಮತೆಯ ಎಚ್ಚರ, ನವೋದಯವನ್ನು ಗೌರವದಿಂದ ಕಾಣುವ ಪರಂಪರೆಯ ಅರಿವು, ಚಾರಿತ್ರಿಕ ಪ್ರಜ್ಞೆ ಮತ್ತು ಸಮಕಾಲೀನ ಸಂವೇದನೆ ಇವೆಲ್ಲವು ಸಮ್ಮಿಲನಗೊಂಡು ಕಾವ್ಯಾಸಕ್ತರೆಲ್ಲ ಆಸಕ್ತಿಯಿಂದ ಭರವಸೆಯ ಕಣ್ಣುಗಳನ್ನರಳಿಸಿ ನಾಳೆಯತ್ತ ನೋಡುವ ಪರಿಸ್ಥಿತಿ ಸೃಷ್ಟಿಯಾಗಿದೆ. ಇಂತಹ ಭರವಸೆಗೆ ಯಾವುದೇ ಚಳುವಳಿಗಳು ಕಾರಣವೆಂದು ನಾನು ಭಾವಿಸುವುದಿಲ್ಲ. ಇದಕ್ಕೆಲ್ಲ ಚಳುವಳಿಯ ಮಿತಿಯನ್ನು ಮೀರಬಲ್ಲ ಸಮರ್ಥ ವೈಯಕ್ತಿಕ ಧ್ವನಿಗಳೇ ಕಾರಣ. ಆದ್ದರಿಂದಲೆ ಇತ್ತೀಚಿನ ಕಾವ್ಯದ ಸಮೀಕ್ಷೆ ನಡೆಯಬೇಕಾದರೆ ಅದು ಅಂತಹ ವೈಯಕ್ತಿಕ ಧ್ವನಿಗಳ ಕುರಿತೆ ಹೊರತು ಚಳುವಳಿಗಳ ಕುರಿತಲ್ಲ. ಈ ಪ್ರಸ್ತುತ ಸಮೀಕ್ಷೆ ಅಂತಹ ಎಲ್ಲಾ ವೈಯಕ್ತಿಕ ಧ್ವನಿಗಳನ್ನು ಕುರಿತು ಹೇಳುತ್ತದೆ ಎಂದು ಹೇಳಿಕೊಳ್ಳುವ ಧೈರ್ಯ ನನಗಿಲ್ಲ. ಅಥವಾ ಗಮನಿಸಿದ ವೈಯಕ್ತಿಕ ಧ್ವನಿಗಳ ಸಮಗ್ರ ವಿಶ್ಲೇಷಣೆ ಇಲ್ಲಿ ನಡೆದಿದೆ ಎಂದು ಹೇಳಲಾರೆ. ಇದಕ್ಕೆ ಕಾರಣವೆಂದರೆ ನಮ್ಮ ಹೆಚ್ಚಿನ ಕವಿಗಳು ಇನ್ನೂ ನೆಲೆಗಳನ್ನು ಕಂಡುಕೊಳ್ಳುತ್ತಿದ್ದಾರೆ. ನೆಲೆ ಕಂಡುಕೊಂಡವರು ಸ್ಥಿರತೆಗೆ ಪ್ರಯತ್ನಿಸುತ್ತಿದ್ದಾರೆ. ಇಂತಹ ಸಂಕ್ರಮಣ ಸ್ಥಿತಿಯ ವಿಶ್ಲೇಷಣೆ ಸಮಗ್ರವಾಗುವುದಾದರೂ ಹೇಗೆ ಸಾಧ್ಯ ? ಆದ್ದರಿಂದಲೇ ಪ್ರಸ್ತುತ ಕನ್ನಡ ಕಾವ್ಯ ಎದುರಿಸುತ್ತಿರುವ ಬಿಕ್ಕಟ್ಟು ಹಾಗೂ ಸವಾಲುಗಳು ಹಾಗು ಇವುಗಳಿಂದ ಅಂತಿಮವಾಗಿ ಹೊಮ್ಮಿರುವ ಆಶಯ ಇವುಗಳನ್ನು ಗುರುತಿಸುವ ಟಿಪ್ಪಣಿಗಳನ್ನಷ್ಟೆ ನಿಮ್ಮ ಮುಂದಿಡುತ್ತಿದ್ದೇನೆ.

2

ಭಾರತೀಯ ಕಾವ್ಯ ಮೀಮಾಂಸೆಯಲ್ಲಿ ಕಾವ್ಯದ ಕುರಿತ ಗಂಭೀರ ಜಿಜ್ಞಾಸೆ ತನ್ನ ಶಿಖರವನ್ನು ಕಂಡುಕೊಂಡಿದ್ದು "ಧ್ವನ್ಯಾಲೋಕ"ದಲ್ಲಿ. ಆನಂದವರ್ಧನ ಯಾವ ಅನುಮಾನಗಳಿಗೂ ಕಾರಣವಿಲ್ಲದಂತೆ ರಸವೇ ಕಾವ್ಯದ ಉದ್ದೇಶ ಮತ್ತು ಧ್ವನಿಯೇ ಕಾವ್ಯದ ಆತ್ಮ ಎಂದು ಸಾರಿದನು. ಪ್ರಸ್ತುತ ಕನ್ನಡ ಸಾಹಿತ್ಯದ ಕುರಿತ

ವಿಶ್ಲೇಷಣೆಯಲ್ಲಿ ಈ ಅಂಶವನ್ನು ಬರೆಯುತ್ತಿರುವುದು ನಿಮ್ಮಲ್ಲಿ ಅನೇಕರಿಗೆ ಅಚ್ಚರಿಯನ್ನುಂಟು ಮಾಡಬಹುದು. ಆದರೆ ಇದನ್ನು ಬರೆದ ಉದ್ದೇಶ ಇಷ್ಟೆ. ಕಾವ್ಯಕ್ಕೆ ಬಾಹ್ಯ ಅಂಶಗಳಷ್ಟೇ ಪ್ರಮುಖವಲ್ಲ, ಇವಕ್ಕೆಲ್ಲ ಭಿನ್ನವಾದ ಅಗೋಚರವಾದ ಆತ್ಮಸ್ವರೂಪಿ ಒಂದು ಅಂಶವಿದೆ ಎಂದು ಅವರು ಅಂದೇ ಗುರುತಿಸಿದ್ದರು. ಪಂಪನಿಂದ ಅಖಂಡಿತವಾಗಿ ಸಾಗಿ ಬಂದ ಸಹಸ್ರ ವರ್ಷಗಳ ಕನ್ನಡ ಕಾವ್ಯ ಪರಂಪರೆಯಲ್ಲಿ ನಿಧಾನವಾಗಿ ಬಾಹ್ಯ ಅಂಶಗಳೇ ಕಾವ್ಯದ ಸತ್ವ ಎಂದು ತಿಳಿಯುವ ಪ್ರವೃತ್ತಿ ಬೆಳೆಯಲು ಆರಂಭವಾಯಿತು. ಸರಿ ಕಾವ್ಯದಲ್ಲಿ ಸೈನಿಕರಂತೆ ಅಲಂಕಾರಗಳು ಕವಾಯತು ಮಾಡಲಾರಂಭಿಸಿದವು. ವಿದ್ವತ್ತಿನ ಇಟ್ಟಿಗೆಯ ರಾಶಿಯನ್ನೇ ತಯಾರಿಸಲಾಯಿತು. ನೈಜ ಕಾವ್ಯ ಮಾತ್ರ ಕಣ್ಮರೆಯಾಗಿತ್ತು. ಕನ್ನಡ ಸಾಹಿತ್ಯದ ಆರಂಭಿಕ ಚಳುವಳಿಗಳು ಈ ಪ್ರವೃತ್ತಿಯನ್ನು ತಡೆಗಟ್ಟಲು ಯತ್ನಿಸಿದರೂ ಶ್ರೇಷ್ಠತರ ಉದ್ದೇಶವನ್ನಿಟ್ಟುಕೊಂಡೇ ಗೋವಿಂದಪೈಯವರು "ಪ್ರಾಸವನ್ನು ಬಿಡುವುದು" ಎಂದರು. ಆಂಗ್ಲ ಸಾಹಿತ್ಯದ ಪ್ರೇರಿತವಾದ ನವ್ಯ ಸಾಹಿತ್ಯ ಇದನ್ನು ಸಮರ್ಥಿಸಿತು. ಆದರೆ ಅದರ ಪರಿಣಾಮ ಮಾತ್ರ ಒಳ್ಳೆಯದಾಗಲಿಲ್ಲ. ಬಾಹ್ಯ ಅಂಶಗಳನ್ನು ಕಡೆಗಣಿಸಿದೊಡನೆಯೆ ಕಾವ್ಯ ಯಾರು ಬೇಕಾದರು ಬರೆಯಬಹುದು ಎಂಬ ಭಾವನೆ ಬೆಳೆಯತೊಡಗಿತು. ಕಾವ್ಯಕ್ಕೆ ಅಗತ್ಯವಾದ ತಾಳ್ಮೆ ಮಾಯವಾಯಿತು. ಅಗ್ಗದ ಜನಪ್ರಿಯತೆಯೇ ಕಾವ್ಯದ ಪರಮ ಉದ್ದೇಶವಾಯಿತು. ಇಂದು ನಾವು ಹೆಮ್ಮೆ ಪಡಬಹುದಾದ ಬೃಹತ್ ಕವಿಗಳ ಸಂಖ್ಯೆಯನ್ನು ಹೊಂದಿದ್ದೇವೆ ನಿಜ. ಆದರೆ ಗಾಳಿ ಊದಿ ಟೊಳ್ಳುಗಳನ್ನು ಕೆಳಕ್ಕೆ ಬೀಳಿಸಿದರೆ ಉಳಿದುಕೊಳ್ಳುವ ಗಟ್ಟಿಕಾಳುಗಳ ಸಂಖ್ಯೆ ಬೆರಳೆಣಿಕೆಯಷ್ಟೂ ಇಲ್ಲ. ನನಗನ್ನಿಸುವಂತೆ ಈ ಕಾರಣದಿಂದ ನಾವು ನಿಜಕ್ಕೂ ಅತ್ಯಂತ ನಿರಾಶಾದಾಯಕ ಸ್ಥಿತಿಯಲ್ಲಿದ್ದೇವೆ.

3

ಇಂದಿನ ಕಾವ್ಯದ ಎರಡು ಮುಖಗಳನ್ನು ಗಮನಿಸಿದ ನಂತರ ನಾವು ಪ್ರಸ್ತುತ ಕಾವ್ಯದ ಕುತೂಹಲಕಾರಿ ವಿದ್ಯಮಾನಗಳನ್ನು ಮತ್ತು ಅವಕ್ಕೆ ಕಾರಣವಾದ ಸಮರ್ಥ ವೈಯಕ್ತಿಕ ಧ್ವನಿಗಳನ್ನು ವಿಶ್ಲೇಷಿಸೋಣ. ನವ್ಯ ಕಾವ್ಯದ ಅವನತಿಯಾಗಲಿ ಅದಕ್ಕೆ ಕಾರಣವಾದ ಅಂಶಗಳಾಗಲಿ ಪ್ರಸ್ತುತ ಲೇಖನದ ಮಿತಿಗೆ ಹೊರತಾದವು. ಆದರೆ ನಾನು ಇಲ್ಲಿ ದಾಖಲಿಸುತ್ತಿರುವ ಕುತೂಹಲಕರ ಅಂಶವೆಂದರೆ ನವ್ಯ ಕಾವ್ಯದಲ್ಲಿ ಪ್ರಬುದ್ಧಮಾನರಾಗಿ ಅಡಿಗರ ಗರಡಿಯಲ್ಲಿ ಪಳಗಿದ ಕವಿಗಳು ಬದಲಾದ ವಾತಾವರಣಕ್ಕೆ ಹೊಂದಿಕೊಂಡ ರೀತಿ. ಈ ದೃಷ್ಟಿಯಿಂದ ಗಮನಿಸಬೇಕಾದ ಇಬ್ಬರು ಕವಿಗಳೆಂದರೆ ಕೆ. ವಿ. ತಿರುಮಲೇಶ್ ಮತ್ತು ಸುಬ್ರಾಯ ಚೊಕ್ಕಾಡಿ. ಕೆ. ವಿ. ತಿರುಮಲೇಶ್ ಬದುಕಿನ ಸೂಕ್ಷ್ಮ ಸ್ತರದಲ್ಲಿ ಕಾವ್ಯದ ಒರತೆಯನ್ನು ಹುಡುಕುವ ಪ್ರಯತ್ನ ಮಾಡುತ್ತ ಅವುಗಳ ನಡುವೆ ತಾತ್ವಿಕ ಸುಸಂಗತತೆಯನ್ನು ಹುಡುಕುವ

ಯತ್ನ ಮಾಡುತ್ತಿದ್ದಾರೆ. ಅವರ "ಅನಥ" ಯಾವ ಪ್ರಕಾರಕ್ಕೂ ಹೆಸರು ತರಬಲ್ಲ ಸಂಕಲನ. ಆದರೆ ಇದೇ ಮಾತುಗಳನ್ನು ಸುಬ್ರಾಯ ಚೊಕ್ಕಾಡಿಯವರ ಬಗ್ಗೆ ಹೇಳಲಾಗದು. ಚೊಕ್ಕಾಡಿಯವರ ಪ್ರಯತ್ನ ನವ್ಯ ಕಾವ್ಯದಲ್ಲೇ ಇನ್ನೂ ಜೀವಂತಿಕೆ ತೆಗೆಯುವ ಕಡೆ ಇದೆ ಎನ್ನಿಸುತ್ತಿದೆ. ತನ್ನಲ್ಲಿ ಶ್ರೇಷ್ಠ ಗುಣಗಳ ಜೊತೆಗೂ ಚೊಕ್ಕಾಡಿಯವರ ಕಾವ್ಯ ಸಮಕಾಲೀನ ಸಾಹಿತ್ಯದ ನಡುವಿನ ಸುಂದರ ಒಂಟಿ ದ್ವೀಪ ದಂತೆ ತೋರುತ್ತದೆ. ಇದೇ ದೃಷ್ಟಿಯಿಂದ ಗಮನಿಸಬೇಕಾದ ಇನ್ನೊಬ್ಬ ಕವಿ ಎಂದರೆ ಎಸ್. ಮಂಜುನಾಥ್.

ಇಂದಿನ ಕಾವ್ಯದ ಇನ್ನೊಂದು ಪ್ರಮುಖ ವಿದ್ಯಮಾನವೆಂದರೆ ಹಿಂದೆಂದು ಇಲ್ಲ ದಷ್ಟು ದೊಡ್ಡ ಸಂಖ್ಯೆಯಲ್ಲಿ ಕವಯಿತ್ರಿಯರು ಬರೆಯುತ್ತಿರುವುದು. ಆದರೆ ಇವರಲ್ಲಿ ಗಟ್ಟಿ ಕಾವ್ಯ ನೀಡಬಹುದಾದವರ ಸಂಖ್ಯೆ ಮಾತ್ರ ಗಮನಾರ್ಹವಾಗಿಲ್ಲ. ಇವರ ಪೈಕಿ ಮೂವರ ಹೆಸರು ಮಾತ್ರ ನನಗೆ ಮುಖ್ಯವೆನ್ನಿಸುತ್ತದೆ. ಅವರೆಂದರೆ ಪ್ರತಿಭಾ ನಂದಕುಮಾರ್, ಚ. ಸರ್ವಮಂಗಳ ಮತ್ತು ಸ. ಉಷಾ. "ನಾವು ಹುಡುಗಿಯರೆ ಹೀಗೆ" ಕವನ ಸಂಕಲನದಲ್ಲಿ ಸಾಮಾನ್ಯ ಕವಯಿತ್ರಿಯರಂತೆ ಪದಚಮತ್ಕಾರದಲ್ಲೆ ಮೈಮರೆತ ಪ್ರತಿಭಾ ನಂದಕುಮಾರ್ ಸಮರ್ಥ ಕವಯಿತ್ರಿಯಾಗಿ ವಿಜೃಂಭಿಸಿದ್ದು "ಈತನಕ" ಕವನ ಸಂಕಲನದಲ್ಲಿ. ಈ ನಡುವೆ ಯೌವನದ ಬೆಡಗು ಬಿನ್ನಾಣಗಳು, ಪ್ರಗಲ್ಭ ಗೃಹಿಣಿಯಂತೆ ಆಳವಾಗಿ ಸಂಸ್ಕರಿಸಲ್ಪಟ್ಟದ್ದವು. ಬದುಕನ್ನು ವೈಚಾರಿಕ ವಾಗಿ ವಿಶ್ಲೇಷಿಸುವ ಪ್ರಕ್ರಿಯೆಯಲ್ಲಿಯೆ ತನ್ನ ವಿಶ್ಲೇಷಣೆಗಳ ತೆಕ್ಕೆಗೆ ದಕ್ಕದೆ ಉಳಿದು ಬಿಡುವ ನಿಗೂಢ ಅಂಶಗಳ ಬಗ್ಗೆ ಬೆರಗು ಕುತೂಹಲಗಳನ್ನು ಉಳಿಸಿಕೊಳ್ಳುವ ಎಚ್ಚರ, ಎಲ್ಲಾ ಬದಲಾವಣೆಗಳಿಗೂ ಸ್ಪಂದಿಸುತ್ತಲೇ ಬದುಕಿನ ಮೂಲಭೂತ ಅಂಶ ಗಳ ಬಗೆಗಿನ ಚಿಂತನೆ ಶೀಲತೆ, ವಸ್ತುನಿಷ್ಠೆ ಅನುಭವಕ್ಕೆ ವ್ಯಕ್ತಿನಿಷ್ಠೆ ವಿವರಗಳನ್ನು ತೊಡಿಸುವ ಆತ್ಮೀಯತೆ ಇವುಗಳ ಮೂಲಕ ಇಂದು ಪ್ರತಿಭಾ ಯಾವ ರಿಯಾಯಿತಿಯ ಅಗತ್ಯ ಇಲ್ಲದಷ್ಟು, ಎತ್ತರಕ್ಕೆ ಬೆಳೆದಿದ್ದಾರೆ. ಪರಂಪರೆ ಕುರಿತ ನಕರಾತ್ಮಕತೆಯಲ್ಲಿ ವೈಯಕ್ತಿಕ ಅಳಲಿನ ವಿಸ್ತಾರವನ್ನು ಕಾಣುವ ಚ. ಸರ್ವಮಂಗಳ ಸಶಕ್ತ ಕವಿತೆ ಗಳನ್ನು ಕೊಟ್ಟ ಗಮನಾರ್ಹ ಕವಯಿತ್ರಿ ಅವರ "ಅಮ್ಮನ ಗುಡ್ಡ" ಅನೇಕ ಕಾರಣ ಗಳಿಂದ ಕನ್ನಡದ ಪ್ರಮುಖ ಕೃತಿಯಾಗುತ್ತದೆ. ಇದೇ ಮಾತುಗಳನ್ನು ಸ. ಉಷಾ ಅವರ ಬಗ್ಗೆ ಹೇಳುವುದು ಕಷ್ಟ. ಉಷಾ ಅವರ ಕಾವ್ಯ ಇನ್ನೂ ತನ್ನ ನೆಲೆಯನ್ನು ಕಂಡುಕೊಳ್ಳಬೇಕಾಗಿದೆ ಎಂದು ನನಗೆನ್ನಿಸುತ್ತದೆ.

ಇತ್ತೀಚಿನ ಕಾವ್ಯದ ಪ್ರಮುಖ ವಿದ್ಯಮಾನ ದಲಿತ ಮತ್ತು ಬಂಡಾಯ ಸಾಹಿತ್ಯಗಳು. ಈ ಎರಡು ಚಳುವಳಿಗಳ ಕುರಿತ ವಿಶ್ಲೇಷಣೆಯ ಸಾಹಸಕ್ಕೆ ನಾನು ಕೈಹಾಕುವುದಿಲ್ಲ. ಆದರೆ ಕಾವ್ಯವನ್ನು ಜನಪರವಾಗಿಸುವ ಸಾಹಸದಲ್ಲಿ ಕಾವ್ಯವನ್ನು ಖಡ್ಗವಾಗಿಸ ಹೊರಟ ಬರಹಗಾರರು ಕಾವ್ಯ ತನ್ನ ಪರಂಪರೆಯಲ್ಲಿಯು ಜನಪರ ವಾಗಿಯೆ ಇತ್ತು ಎಂಬ ಸೂಕ್ಷ್ಮವನ್ನು ಮರೆತರು. ಪಂಪ ಇವರಿಗೆ ಜನಪರನಲ್ಲದ

ಕವಿಯಾಗಿ ಕಂಡ. ಆದರೆ ಸಂಸ್ಕೃತವೇ ಕಾವ್ಯಭಾಷೆಯಾಗಿದ್ದ ಕಾಲದಲ್ಲಿ ಕನ್ನಡದಲ್ಲಿ ಕಾವ್ಯ ರಚಿಸಿದ ಪಂಪ ಎಷ್ಟರ ಮಟ್ಟಿಗೆ ಜನಪರನಾಗಿದ್ದ ಎಂಬುದು ಇವರಿಗೆ ಹೊಳೆಯಲಿಲ್ಲ. ಕರ್ಣನ ಬಾಯಲ್ಲಿ ಕುಲದ ವೃಕ್ಷವನ್ನೇ ಅಲುಗಿಸಬಲ್ಲ ಪದ್ಯ ಗಳನ್ನು ಹೇಳಿಸಿದ ಪಂಪ ಒಬ್ಬ ನೈಜ ಬಂಡಾಯಗಾರನಾಗಿದ್ದ. ಹೀಗೆ ಈ ಚಳು ವಳಿಗಳ ದೌರ್ಬಲ್ಯಗಳೆಲ್ಲವು ಪರಂಪರೆ ಕುರಿತ ನಿರ್ಲಕ್ಷ್ಯದಲ್ಲಿಯೆ ಇವೆ. ಜೊತೆಗೆ ಶೋಷಣೆಯೆಲ್ಲವೂ ಬ್ರಾಹ್ಮಣರಿಂದಲೇ ಆಗಿದೆ ಎಂಬ ಸಾಮಾನ್ಯೀಕರಣವೆ ಈ ಚಳು ವಳಿಯಲ್ಲಿನ ದೊಡ್ಡ ಬಿರುಕು. "ಇಕ್ರಲಾ ವದೀರ್ಲಾ ನನ್ನ ಮಕ್ಕಳ ಚರ್ಮ ಎಬ್ರಲಾ" ಎಂದು ಅಬ್ಬರಿಸಿದ ಸಿದ್ದಲಿಂಗಯ್ಯನವರೊಬ್ಬರೆ ದಲಿತ ಸಾಹಿತ್ಯ ಕೊಟ್ಟ ಕೊಡುಗೆಯಾಗಿ ಉಳಿದಿರುವುದು ಆ ಚಳುವಳಿಯ ಸೋಲನ್ನು ಹೇಳಬಲ್ಲದು.

ಈ ದೃಷ್ಟಿಯಿಂದ "ಬಂಡಾಯ ಸಾಹಿತ್ಯ"ವೆ ಕೊಂಚ ಗಮನಾರ್ಹವಾದದ್ದು. ಚಂದ್ರಶೇಖರ ತಾಳ್ಯ, ಬಸವರಾಜ ಸಬರದ, ಪ್ರಹ್ಲಾದ ಅಗಸನಕಟ್ಟೆ, ಡಿ. ವಿ. ಬಡಿಗೇರ, ಅಲ್ಲಮಪ್ರಭು ಬೆಟ್ಟದೂರು ಮುಂತಾದ ಪ್ರಮುಖ ಕವಿಗಳನ್ನು ಅದು ಕೊಟ್ಟಿದೆ. ಆದರೆ ಇವರೆಲ್ಲರೂ ತಮ್ಮ ನೆಲೆಗಳನ್ನು ಕಂಡುಕೊಂಡದ್ದು ತಮ್ಮ ಸ್ವಸಾಮರ್ಥ್ಯದಿಂದಲೆ ಎಂಬುದು ಮಾತ್ರ ಮರೆಯಲಾಗದ ಸಂಗತಿ. ಹಲವರಿಗೆ ಅಸಮಾಧಾನವಾಗಬಹುದಾದರೂ ನಾನು ಒಂದು ಮಾತನ್ನು ಬರೆಯಲೇಬೇಕು. ಅದೆಂದರೆ ಯಾವ "ಮ್ಯಾನಿಫೆಸ್ಟ್"ಗಳೂ ಕವಿತೆಯಾಗಲಾರವು, ಕಾವ್ಯ ಎಲ್ಲರನ್ನು ಒಪ್ಪಿಕೊಳ್ಳುವ ಎಲ್ಲರಿಗಾಗಿನ ತಾಯಿಯ ವಿಶಾಲ ಮಮತೆಯಲ್ಲಿ ಮಾತ್ರ ಹುಟ್ಟುತ್ತದೆ.

## 4

ಇನ್ನು ಇತ್ತೀಚಿನ ದಿನಗಳಲ್ಲಿ ಹೆಚ್ಚು ಬರೆಯುತ್ತಿರುವ ಕವಿಗಳೆಂದರೆ ಎಚ್. ಎಸ್. ವೆಂಕಟೇಶಮೂರ್ತಿ, ಬಿ. ಆರ್. ಲಕ್ಷ್ಮಣರಾವ್, ಜಯಂತ ಕಾಯ್ಕಿಣಿ ಮತ್ತು ಎಚ್. ಎಸ್. ಶಿವಪ್ರಕಾಶ್. ಆರಂಭದಲ್ಲಿ ಅಪಾರ ಭರವಸೆ ಮೂಡಿಸಿದ್ದ ಬಿ. ಆರ್. ಲಕ್ಷ್ಮಣರಾವ್ ಇತ್ತೀಚೆಗೆ ಏಕೋ ಅಲ್ಪ ತೃಪ್ತರಾದಂತೆ ತೋರುತ್ತದೆ. "ಲಿಲ್ಲಿ ಪುಟ್ಟಿಯ ಹಂಬಲ"ದಲ್ಲಿ ಆಧ್ಯಾತ್ಮಿಕ ಕಾಮವನ್ನು ಮೀರಿದ ಸೌಂದರ್ಯಾನು ಭೂತಿಯನ್ನು ಬಿಂಬಿಸಿದ ಲಕ್ಷ್ಮಣರಾಯರು ಮುಂದಿನ ಕವನ ಸಂಕಲನಗಳಲ್ಲಿ ಅಲ್ಲಿಂದ ಬೆಳೆಯುವುದಿರಲಿ ಆ ಮಟ್ಟಕ್ಕೇ ಮುಟ್ಟಲಿಲ್ಲ. ಲಕ್ಷ್ಮಣರಾಯರ ಇತ್ತೀಚಿನ ಕೆಲವು ಕವಿತೆಗಳು "ಜಾಹಿರಾತು ಗೀತೆ"ಗಳಷ್ಟು ತೆಳುವಾಗಿರುವುದನ್ನು ನೋಡಿದರೆ ಅವರು ತಮ್ಮ ಸಹಜ ಕಾವ್ಯವನ್ನೆಲ್ಲ ಬಲಿ ಕೊಡುತ್ತಿದ್ದಾರೊ ಎಂಬ ಗಾಬರಿ ಹುಟ್ಟಿ ಕೊಳ್ಳುತ್ತದೆ. ಇವರೊಟ್ಟಿಗೆ ಹೆಜ್ಜೆ ಇಡುತ್ತಿರುವ ಜಯಂತ ಕಾಯ್ಕಿಣಿಯವರು ಪದ ಪ್ರಯೋಗದ ಭಿನ್ನ ಸಾಧ್ಯತೆಗಳನ್ನು ಪರಿಶೀಲಿಸುವ ರಚನಾತ್ಮಕ ಚಮತ್ಕಾರಿಕತೆ ಯಲ್ಲಿಯೇ ಮೈಮರೆತಂತೆ ತೋರುತ್ತದೆ.

ಇನ್ನು ಎಚ್. ಎಸ್. ವೆಂಕಟೇಶಮೂರ್ತಿಯವರ ಸಮಸ್ಯೆ ಬೇರೆ ರೀತಿಯದು. ಅವರ ಮಹತ್ವಾಕಾಂಕ್ಷೆಯೆ ಅವರಿಗೆ ಮಿತಿಯಾಗಿರುವಂತೆ ನನಗೆ ತೋರುತ್ತದೆ. ಹಳೆ ಸಾಹಿತ್ಯ ತಂತ್ರಗಳನ್ನು ಹೊಸ ಕಾವ್ಯದ ಅನಿವಾರ್ಯತೆಗಳಿಗೆ ಹೊಂದಿಸಿಕೊಳ್ಳುವ ಮೂಲಕ ಅಪಾರ ಭರವಸೆ ಹುಟ್ಟಿಸಿದ್ದ ಎಚ್.ಎಸ್.ವಿ. ಅವರು, ತಮ್ಮ ಮಹತ್ವಾಕಾಂಕ್ಷೆಗೆ ಅಗತ್ಯವಾದ ತಾಳ್ಮೆಯನ್ನು ಮಾತ್ರ ಮೈಗೂಡಿಸಿಕೊಳ್ಳಲಾರದೆ ಹೋದರು. ಅವರ ಇತ್ತೀಚಿನ "ಋತು ವಿಲಾಸ" ಎಂಬ ಕಾಳಿದಾಸನ ಋತು ಸಂಹಾರದ ಅನುಸೃಷ್ಟಿ, ನನಗೆ ನಿಜಕ್ಕೂ ಗಾಬರಿಯನ್ನೇ ಹುಟ್ಟಿಸಿತು. ವಿಮರ್ಶೆಯ ಪರಿಭಾಷೆಯಲ್ಲಿಯೆ ಹೇಳುವುದಾದರೆ ತಾತ್ವಿಕತೆ ಸೌಂದರ್ಯವನ್ನು ಸೃಷ್ಟಿಸುವ ಮೊದಲು ಅವರು ತಮ್ಮ ಭಾಷೆಯನ್ನು ಆ ಸಾಧ್ಯತೆಗೆ ಹಿಗ್ಗಿಸಿಕೊಳ್ಳಬೇಕಾಗಿದೆ. ಆಗ ಮಾತ್ರವೆ ಪರಿಪೂರ್ಣ ಕಾವ್ಯ ಹೊರಬರುವುದು ಮತ್ತು ಅವರ ಮಹತ್ವಾಕಾಂಕ್ಷೆ ಮೂರ್ತರೂಪ ತಾಳುವುದು. ಅಂತಹ ಕಾವ್ಯ ಮಾತ್ರವೇ ಕನ್ನಡ ಸಾಹಿತ್ಯಕ್ಕೆ ಹೊಸ ತಿರುವು ಕೊಡಬಲ್ಲದು.

ಇತ್ತೀಚೆಗೆ ಬರೆಯುತ್ತಿರುವ ಬರಹಗಾರರ ಪೈಕಿ ಅತ್ಯಂತ ಭರವಸೆ ಹುಟ್ಟಿಸಿದವರೆಂದರೆ ಹೆಚ್. ಎಸ್. ಶಿವಪ್ರಕಾಶ್. ಸಮಕಾಲೀನ ಬದುಕನ್ನು ಚರಿತ್ರೆಯ ಹಿನ್ನೆಲೆಯಲ್ಲಿ ದಾರ್ಶನೀಕರಿಸುವ, ಬದುಕಿನ ಸೂಕ್ಷ್ಮಗಳನ್ನು ಕಾವ್ಯದ ಸಾವಯವ ಘಟಕವಾಗಿಸುವ ಅವರ ಸಾಮರ್ಥ್ಯ ವಿನೂತನವಾದದ್ದು. ನವ್ಯ ಕಾವ್ಯದ ತಂತ್ರಗಳನ್ನು ಪ್ರಯೋಗಾರ್ಥವಾಗಿಯೇ ಬಳಸಿಕೊಳ್ಳುವ ಇವರು ಸಮಕಾಲೀನತೆಯ ಸಮರ್ಥ ಧ್ವನಿಯಾಗುತ್ತಿದ್ದಾರೆ. ಶಿವಪ್ರಕಾಶರು ಈ ದಾರಿಯಲ್ಲಿಯೆ ಸ್ಥಿರತೆ ಕಂಡುಕೊಂಡರೆ ಅದರಿಂದ ಕನ್ನಡ ಸಾಹಿತ್ಯಕ್ಕೆ ಆಗುವ ಲಾಭವೇನು ಸಾಮಾನ್ಯವಾದದ್ದಲ್ಲ.

## 5

ಇತ್ತೀಚಿನ ಕನ್ನಡ ಕಾವ್ಯವನ್ನು ಕುರಿತ ಈ ಟಿಪ್ಪಣಿಗಳು ಸಮಗ್ರವಾದದ್ದು, ಪ್ರಾತಿನಿಧಿಕವಾದದ್ದು ಎಂದೇನು ನಾನು ಭಾವಿಸಿಲ್ಲ. ಅದಕ್ಕೆ ಲೇಖನದ ಇತಿಮಿತಿಗಳು ಅಡ್ಡ ಬರುತ್ತವೆ. ಇಲ್ಲಿ ನಾನು ಗಮನಿಸಿದ ಕವಿಗಳಷ್ಟೇ ಪ್ರಮುಖರು ಎಂದೇನು ನನ್ನ ಅಭಿಮತವೂ ಅಲ್ಲ. ಆದರೆ ಕಾವ್ಯದ ಪ್ರವಾಹದಲ್ಲಿ ಇಂತಹ ಅಲೆಗಳು ಮುಖ್ಯವಾದದ್ದು ಎಂದು ಗುರುತಿಸುವ ಪ್ರಯತ್ನ ಮಾತ್ರ ಮಾಡಿದ್ದೇನೆ. ಇನ್ನೊಂದು ಮುಖ್ಯ ವಿಷಯವೆಂದರೆ ನಾನು ಈ ಟಿಪ್ಪಣಿಗಳಲ್ಲಿ ಹಿರಿಯ ಬರಹಗಾರರ ಕುರಿತು ಪ್ರಸ್ತಾಪಿಸುವ ಪ್ರಯತ್ನ ಮಾಡಿಲ್ಲ. ಏಕೆಂದರೆ ಇವರ ಕಾವ್ಯಗಳು ಪ್ರತ್ಯೇಕ ಲೇಖನಗಳಿಗೆ ವಸ್ತುವಾಗಬಲ್ಲವಾದ್ದರಿಂದ ಅಂತವರ ಬರಹದ ವಿಶ್ಲೇಷಣೆಗೆ ತಾತ್ವಿಕವಾಗಿಯೂ ಸರಿಯಲ್ಲ ಸಮಕಾಲೀನ ಸಾಹಿತ್ಯ ಆತ್ಮವಿಶ್ಲೇಷಣೆ ಮತ್ತು ಅತಿ ವೈಯಕ್ತಿಕತೆಯಿಂದ ತಪ್ಪಿಸಿಕೊಂಡು ಹುಲುಸಾಗಿ ಬೆಳೆಯುತ್ತಿದೆ. ವ್ಯಕ್ತಿ ವಿಶಿಷ್ಟ

ಪ್ರಜ್ಞೆಯ ಮೂಲಕ ಬದುಕನ್ನು ನೋಡುವ, ಹೊರಗಿನ ವೀಕ್ಷಣೆ ಒಳಗಿನ ಶೋಧನೆಯ ಸಂಕೀರ್ಣ ಕಲಾತ್ಮಕತೆಯನ್ನು ದಾಖಲಿಸುವ ಯತ್ನ ನಡೆಯುತ್ತಿದೆ. ಇದು ಸಮಾಜ ಚಲಿಸುತ್ತಿರುವ ದಿಕ್ಕನ್ನು ಇಂತಹ ಚಲನ ಶೀಲತೆಯಲ್ಲಿ ಮನುಷ್ಯನ ಇರುವಿಕೆಯನ್ನು ಅವನ ಸಾಮಾಜಿಕ ಸಂಬಂಧಗಳನ್ನು ದೈನಂದಿನ ಜೀವನದ ಪರಿಚಿತ ವಿವರಗಳಲ್ಲಿ ಪೂರ್ಣವಾಗಿ ಅಧಿಕೃತವಾಗಿ ಹಿಡಿಯುವ ಯತ್ನ ಸಾಗಿದೆ. ವ್ಯಕ್ತಿ ವಿಶಿಷ್ಟ ಪ್ರಜ್ಞೆಯ ಮೂಲಕ ಬದುಕನ್ನು ನೋಡುವ ಪ್ರವೃತ್ತಿ ಜಾಗೃತವಾಗುತ್ತಿದೆ. ಇವೆಲ್ಲವನ್ನು ಕುರಿತ ಸಮಗ್ರ ವಿಮರ್ಶೆ ಕುತೂಹಲಕಾರಿ ಎಂಬ ಅಂಶವನ್ನು ಈ ಟಿಪ್ಪಣಿಗಳು ಧ್ವನಿಸಿದರೆ ನನ್ನ ಪ್ರಯತ್ನ ಸಾರ್ಥಕ್ಯವನ್ನು ಪಡೆಯುತ್ತಿದೆ ಎಂದು ನಂಬಿಕೊಂಡಿದ್ದೇನೆ.

— o —

## ಏಕೆಂದರೆ

ಸೊರಗಿದ ಆದರ್ಶಗಳು
ಕಾವೇರುವ ಹೊತ್ತು
ಮಾತು ನೀನೇ ಇರಲಿಲ್ಲ;
ಕೊರಗಿದ ಹೃದಯಗಳು
ಎದ್ದೇಳುವ ಹೊತ್ತು
ಹಸಿವುಗಳೇ ನೀವು ಬಿಡಲಿಲ್ಲ
ಜಿಗಿಯುವ
ಸುಪ್ತವಾಗಿಸುವ ಹೊತ್ತು
ನೀವು ಬಿಡಲಿಲ್ಲ

ಕನಸುಗಳು ಎಳುವ ಹೊತ್ತು
ನೀವೇ ಕೊಂಡುಬಿಟ್ಟಿರಲ್ಲ ?
ಕನಸುಗಳೇ ಇಲ್ಲ !

—ಭಗವತಿ, ಎಂ. ಆರ್.

# ಇಳಿಬಿದ್ದ ಮುಖದಲ್ಲಿ

ಶ್ರೀಧರ ಪಿಸ್ಸೆ

ಕೆಲಸ ಕೈ ಸಾಗದೆ
ಮಾತು ಮಣ್ಣು
ಪ್ರೀತಿ ಕೆಂಡ

* * *

ಕೆಂಗಣ್ಣು ಕರಿಗಣ್ಣು
ಕಣ್ಣೀರು ಕೆನ್ನೀರು
ಬಾಡಿ ಬಗ್ಗಿದ ಬೆನ್ನು

* * *

ಬಲ್ಬು ಮುಖಗಳ
ಪ್ರಖರ ಪ್ರಕಾರ
ಅಳಿದು ಹಲ್ಲುಗಿಂಜು

* * *

ಟಣ್ಣ ನೆಸೆದರೆ ಮಾತು
ಮೇಲಕೆರಗುವ ಕಣ್ಣು
ಹೊಮ್ಮಿ ಚಿಮ್ಮುವ ನಗು :
ತುಳಿತುಳಿದ ಕೆಸರು ಗದ್ದೆ

* * *

ಎಲ್ಲೋ ನಕ್ಕ ನಗುವನರಸಿ
ಎಲ್ಲೋ ಹೊರಟ ಹಾಡ ಹಿಂದೆ
ಹೇಗೋ ಬಿದ್ದ ಸುಳಿಯು ಸುತ್ತಿ
ದೂರ ದರ್ಶಕೆ ದೊರಕಿದೆ ಕಣ್ಣು

— o —

ಅನುವಾದ* :

---

# ಮಳೆಯ ದಿನ

ಮೂಲ : ರವೀಂದ್ರನಾಥ ಠಾಕೂರ್

---

ಅನುವಾದ : ಪ್ರತಿಭಾ ನಂದಕುಮಾರ್

ಕಾಡಿನ ಕಪ್ಪು ಸೆರಗಿನ ಮೇಲೆ
ವೇಗವಾಗಿ ಕವಿಯುವ ಮೋಡಗಳು

ಓ ಕಂದ ! ಹೋಗಬೇಡ ಹೊರಗೆ.

ಮಬ್ಬು ಕವಿದ ಗಗನಕ್ಕೆ ತಲೆ ಬಡಿಯುವ
ಕೊಳದ ಬದಿಯ ಸಾಲು ತೆಂಗುಗಳು
ಹುಣಸೆ ರೆಂಬೆಯ ಮೇಲೆ ಮೌನವಾಗಿ
ಕುಳಿತ ತೊಯ್ದ ರೆಕ್ಕೆಯ ಕಾಗೆಗಳು
ನದಿಯ ಪೂರ್ವ ತೀರ ಆವರಿಸಿ
ಗಾಢವಾಗುತ್ತಿರುವ ಖಿನ್ನತೆ

ಬೇಲಿಗೆ ಕಟ್ಟಿದ ನಮ್ಮ ಹಸು
ಜೋರಾಗಿ ಕರೆಯುತ್ತಿದೆ.

ಓ ಮಗುವೆ, ನೀನಿಲ್ಲೆ ನಿಲ್ಲು
ಕೊಟ್ಟಿಗೆಗೆ ನಾನದನು ಕರೆತರುವವರೆಗೆ

ಕೆಸರು ಗದ್ದೆಯ ತುಂಬ
ಕೆರೆಯ ಒಡ್ಡು ಮೀರಿ ಪಾರಾದ
ಮೀನುಗಳ ಹಿಡಿವ ಜನ
ತಾಯಿಯ ರೇಗಿಸಲು ಓಡಿ ಬಂದ
ನಗುವ ಹುಡುಗನಂತೆ
ಕಿರಿ ಓಣಿಯಲ್ಲಿ ತೊರೆಯಾಗಿ
ಹರಿವ ಮಳೆಯ ನೀರು.

ಕೇಳು, ಹೊಳೆಯಲ್ಲಿ ಯಾರೋ
ಅಂಬಿಗನನ್ನಿಗಾಗಿ ಕರೆಯುತ್ತಿದ್ದಾರೆ.
ಓ ಕಂದ, ಹಗಲು ಮಸುಕಾಗಿದೆ
ದೋಣಿ ಸಂಚಾರ ನಿಂತಿದೆ.

ಹುಚ್ಚು ಹೊಳೆಯು ಸವಾರಿ ಗಗನಕ್ಕೆ
ಏನು ಜೋರು, ಅಸಹನೆ ನದಿಯು ನೀರಿಗೆ
ತುಂಬಿದ ಕೊಡ ಹೊತ್ತು ಗಂಗೆಯಿಂದ
ಮನೆಗೆ ಧಾವಿಸುತ್ತಿದ್ದಾರೆ ಹೆಂಗಸರು.

ಸಂಜೆ ದೀಪ ಬೆಳಗಿಸಬೇಕು
ಓ ಮಗುವೆ, ಹೋಗಬೇಡ ಹೊರಗೆ.

ಬಜಾರಿನ ದಾರಿ ನಿರ್ಜನ
ನದಿಯ ಓಣಿ ಜಾರು
ಬಿದಿರು ಮೆಳೆಯಲ್ಲಿ ಗಾಳಿ
ಕೂಗಿ ಸೆಣೆಸುತ್ತಿದೆ
ಬಲೆಗೆ ಸಿಕ್ಕಿದ ಕಾಡು ಮೃಗದಂತೆ.

—("The Cresent Moon" ಸಂಕಲನದಿಂದ)

— o —

* ಈ ಅಂಕಣದಲ್ಲಿ ಇನ್ನು ಮುಂದೆ ಇತರೆ ಭಾಷೆಗಳ ಅನುವಾದಿತ ಕವಿತೆಗಳನ್ನು ಪರಿಚಯಿಸಲಾಗುತ್ತದೆ.

---

## ದಾರಿ ಬೆಳಕು

---

ಉದಯ ಧರ್ಮಸ್ಥಳ

ಕಲ್ಲುಗಳಿಗೆ ಬೇರು ಬಂದು
ಮರಗಳಿಗೆಲ್ಲ ರೆಕ್ಕೆ ಬಂದು
ನಕ್ಷತ್ರಗಳು ನನ್ನ ಕೈಯಲ್ಲಿನ
ಬೆಂಕಿಚೆಂಡುಗಳಾಗುತ್ತಿವೆ

ಉಳಿದೆಲ್ಲ ಆಟದಲ್ಲಿ
ಚಿನ್ನಿ ದಾಂಡು, ಚನ್ನೆಮಣೆ
ಕಪ್ಪು ಹಳ್ಳದ ಹಳೇ
ಮರದ
ತಗ್ಗುಗಳಲ್ಲಿ
ಕೆಂಪು ಚನ್ನೇ ಕಾಯಿ
ಊರ ಹಿಂದಿನ ಬಸದಿ ಬಳಿ
ಹಳೇ ದೊಡ್ಡ ಮರ
ಹಸಿರು
ಅದು ಬುಡದಲ್ಲಿ ಹೊಸ ಬಿಸಿ ಉಸಿರು
ಒಸರು
ಅದರಿಂದಾಗಿ ಕಾಲ–ಕಾಯ–
ಬಸಿರು
ಲಯವಿಲ್ಲದ
ಆ
ಲಯ
ನಯವಿಲ್ಲದ ವಿ–
ನಯ, ಭಯವಿಲ್ಲದ ಅ
–ಭಯ
ಇವೆಲ್ಲ ಶಬ್ದ–ಅಲಂಕಾರ
ಒಳಗೆಲ್ಲ ಬಿಸಿ ಅಂಕುರ
ತುಪ್ಪಳದ ಚೀಲದಲ್ಲಿ
ಜಿನುಗುವ ಜಿಗುಟು
ಮೈಯೆಲ್ಲ ಕಮಟು
ವಾಸನೆಯ ಬೆವರಿನ ಸಗಟು
ಬಿಸಿ ಕಾವಲಿಗೆ ತೊಟ್ಟು ನೀರು
ನನ್ನ ಕೈಯಲ್ಲಿನ ಲಾಂದ್ರ
ನನಗೆ ನಕ್ಷತ್ರ ಪಥ
ಅಮರತ್ವದ ಭೂತ
ಉಳಿದೆಲ್ಲವು ಪ್ರೇತ !!

— o —

# ಅಣುಶಕ್ತಿಯ ಅಧ್ವಾನಗಳು

ಮಾಧವ ಐತಾಳ್

ಅಣುಶಕ್ತಿ ಇವತ್ತು ನಮ್ಮನ್ನು ಕಾಡುತ್ತಿರುವ ಅತ್ಯಂತ ಪ್ರಬಲ ಸಮಸ್ಯೆಯಾಗಿದೆ. ಶಕ್ತ ರಾಷ್ಟ್ರಗಳಿಗೆ ಬೇಡವಾಗುತ್ತಿರುವ ಅತ್ಯಂತ ಅಪಾಯಕಾರಿ ಅಣು ಯೋಜನೆಗಳು ನಮ್ಮಲ್ಲಿ ದೊಡ್ಡ ಉದ್ದೇಶಗಳಾಗುತ್ತಿವೆ. ಇದರ ಅಪಾಯಕಾರಿ ಹಾವಳಿಗಳು ನಮ್ಮ ತಲೆಯ ಮೇಲಿನ ತೂಗುಕತ್ತಿಯಾಗಿದೆ.

ಪ್ರಪಂಚದಲ್ಲಿರುವ ಎಲ್ಲ ಮೂಲವಸ್ತುಗಳ ಅತೀ ಸಣ್ಣ ತುಣುಕಿಗೆ ಪರಮಾಣು ಎನ್ನುತ್ತಾರೆ. ಮೂಲವಸ್ತುಗಳಲ್ಲಿ ಸ್ಥಿರ ಮತ್ತು ಅಸ್ಥಿರ ರೂಪಗಳಿವೆ. ಯುರೇನಿಯಂನಂತಹ ಭಾರ ವಸ್ತುಗಳ ಪರಮಾಣು ಕೇಂದ್ರವನ್ನು ನ್ಯೂಟ್ರಾನುಗಳಿಂದ ಒಡೆದರೆ ಅಗಾಧ ಶಕ್ತಿ, ನ್ಯೂಟ್ರಾನುಗಳು, ಗ್ಯಾಮಾ ವಿಕಿರಣ, ವಿಕಿರಣ ವಸ್ತುಗಳು ಹೊರಬರುತ್ತವೆ.

ಒಂದು ಕೆ.ಜಿ. ಯುರೇನಿಯಂನಲ್ಲಿನ ಎಲ್ಲಾ ಪರಮಾಣುಗಳನ್ನೂ ಒಡೆದಾಗ ಉಂಟಾಗುವ ಶಕ್ತಿ 176 ಲಕ್ಷ ಕೆ.ಜಿ. ಗನ್ ಪೌಡರ್‌ನ ಸ್ಫೋಟಕ ಶಕ್ತಿಗೆ ಸಮನಾದದ್ದು. ಈ ಶಕ್ತಿಯನ್ನು ಅಣುಬಾಂಬಿನ ರೂಪದಲ್ಲಿ ಬಳಸಿದಾಗ ಬಂಡೆ, ಕಾಂಕ್ರೀಟು, ಲೋಹ ಮುಂತಾದವೆಲ್ಲಾ ಕರಗಿ ಆವಿಯಾಗಿ ಪ್ರಚಂಡ ಬಿರುಗಾಳಿ ಎದ್ದು ಲಕ್ಷಾಂತರ ಜನರನ್ನು ಹಲವೇ ನಿಮಿಷದಲ್ಲಿ ಕೊಲ್ಲುತ್ತದೆ. ಎಲ್ಲ ಜೀವಿಗಳೂ ಇರುವ ಸಾರಜನಕ ನ್ಯೂಟ್ರಾನುಗಳನ್ನು ಹೀರಿಕೊಂಡು ಇಂಗಾಲ–14 ಎಂಬ ವಿಕಿರಣ ವಸ್ತುವಾಗಿ ಪರಿವರ್ತಿತವಾಗುತ್ತದೆ. ಇಂಗಾಲ–14ರ ಅರ್ಧ ವಿಕಿರಣಕ್ಕೆ 5640 ವರ್ಷ ಬೇಕು. ಇಂಗಾಲ ಕೂಡ ಜೀವಿಗಳಲ್ಲಿರುವ ಸಕ್ಕರೆ–ಪಿಷ್ಟದಲ್ಲಿ, ಪ್ರೋಟೀನಿನಲ್ಲಿ ವಂಶವಾಹಿಗಳಲ್ಲಿರುವ ಬಹು ಮುಖ್ಯ ಮೂಲವಸ್ತು. ಅಸ್ಥಿರವಾದ ಇಂಗಾಲ–14 ವಿಕಿರಣ ಸೂಸಿ ಸಾರಜನಕವಾಗಿ ಪರಿವರ್ತಿತವಾಗಿ, ವಿಕೃತವಾಗಿ ಕುಸಿಯುತ್ತಿದೆ, ಜೀವಕೋಶಗಳು ಸಾಯುತ್ತವೆ. ಜೀನುಗಳು ಬದಲಾಗಿ ವಿಕೃತ ಮಕ್ಕಳು ಜನಿಸುತ್ತವೆ. ರೋಗ ನಿರೋಧಕ ಶಕ್ತಿ ಕುಂದಿ AIDSನಂತಹ ರೋಗಗಳು ಉತ್ಪತ್ತಿಯಾಗುತ್ತವೆ. ಅಮೆರಿಕಾವು ಪರಮಾಣು ಪ್ರಯೋಗಗಳನ್ನು ಶುರು ಮಾಡುವ ಮುನ್ನ ಗಾಳಿಯಲ್ಲಿದ್ದ ಇಂಗಾಲ–14ರ ಪ್ರಮಾಣ 660 ಕೆ.ಜಿ. 1958ರಲ್ಲಿ ಇದು 960 ಕೆ.ಜಿ. ಅದೇ ಲೆಕ್ಕದಲ್ಲಿ ಈಗ ಗಾಳಿಯಲ್ಲಿ 2000 ಕೆ.ಜಿ. ಮೊದಲಿಗಿಂತ 130 ಪಟ್ಟು ಹೆಚ್ಚು !

ಅಣುವಿನ ಬಳಕೆಯಲ್ಲಿ "ಶಾಂತಿಯುತ" ಎಂಬ ಮಾತು ಅಸಂಬದ್ಧ. ಭೂಮಿಯಿಂದ ಯುರೇನಿಯಂ ಅಗೆಯುವಾಗ "ರೇಡಾನ್" ಎಂಬ ವಿಕಿರಣಶೀಲ ಅನಿಲ

ಉತ್ಪತ್ತಿಯಾಗುತ್ತದೆ. ಶೇ. 20—50 ಮಂದಿ ಗಣಿ ಕೆಲಸಗಾರರು ಶ್ವಾಸಕೋಶ ಕ್ಯಾನ್ಸರ್‌ನಿಂದ ಸಾಯುತ್ತಾರೆ. ಒಂದು ಟನ್ ಅದಿರನ್ನು ಪುಡಿ ಮಾಡಿದರೆ ಒಂದೂವರೆ ಕೆ.ಜಿ. ಯುರೇನಿಯಂ ದೊರೆಯುತ್ತದೆ. ಉಳಿದದ್ದು ಕಲ್ಲುಪುಡಿ. ಇದರ ರಾಶಿಯ ಬಳಿ ವಾಸಿಸುವವರಿಗೆ ವಿಕೃತ ಮಕ್ಕಳು ಜನಿಸಿವೆ. ರಾಶಿಯ ಮೇಲೆ ಮಳೆ ಬಿದ್ದು ಹರಿದು ನದಿಗೆ ಸೇರಿ ಜಲಚರಗಳೆಲ್ಲ ಮಡಿದಿವೆ.

ಯುರೇನಿಯಂ ಸಿಡಿಸಿದ ನಂತರ ಉಳಿಯುವ ಭಸ್ಮದಲ್ಲಿನ ಪ್ಲುಟೋನಿಯಂ 24 ಸಾವಿರ ವರ್ಷಗಳ ಕಾಲ ವಿಕಿರಣ ಸೂಸುತ್ತಾ ಅರ್ಧದಷ್ಟು ಮಾತ್ರ ನಶಿಸುತ್ತದೆ. ಈಗಿರುವ 370 ಸ್ಥಾವರಗಳಿಂದ ಅವುಗಳ 300 ವರ್ಷ ಆಯುಷ್ಯದಲ್ಲಿ ಸುಮಾರು 37,00,00,000 ಕೆ.ಜಿ. ವಿಕಿರಣ ವಸ್ತುಗಳು ಉತ್ಪತ್ತಿಯಾಗುತ್ತವೆ. ಪ್ಲುಟೋನಿಯಂ ಈಗಾಗಲೇ 190 ಟನ್‌ಗಳಷ್ಟು ಶೇಖರವಾಗಿದೆ. ಇದನ್ನು ಬೇರೆ ಸ್ಥಾವರಗಳಲ್ಲಿ ಉಪಯೋಗಿಸಬಹುದು. ಬೇರೆ ಗ್ರಹಗಳಿಗೆ ರಾಕೆಟ್ ಮೂಲಕ ಕಳಿಸಿದರೆ ಮಾತ್ರ ಭೂಮಿ ಪರಿಶುದ್ಧವಾದೀತು, ಬೇರೆ ದಾರಿಗಳೇ ಇಲ್ಲ.

ಆಯುಸ್ಸು ತೀರಿದ ಅಣುಸ್ಥಾವರಗಳನ್ನು ವಿಸರ್ಜಿಸುವುದು ಇನ್ನೊಂದು ತಲೆನೋವಿನ ಕೆಲಸ. ಜಗತ್ತಿನಾದ್ಯಂತ ಅಣುಸ್ಥಾವರಗಳ ಉಸ್ತುವಾರಿ ಎಷ್ಟು ಗೋಜಲಾಗಿದೆಯೆಂದರೆ ಅಮೆರಿಕಾದಲ್ಲೆ 65 ಸ್ಥಾವರಗಳನ್ನು ಮುಚ್ಚಲು ನಿರ್ಧರಿಸಲಾಗಿದೆ. 1974ರಿಂದೀಚೆಗೆ ಯಾವ ಹೊಸ ಯೋಜನೆಯನ್ನೂ ಕೈಗೆತ್ತಿಕೊಂಡಿಲ್ಲ. ಯುರೋಪಿನ ಇತರ ದೇಶಗಳು ಇನ್ನು 25 ವರ್ಷಗಳಲ್ಲಿ ಅಣುಸ್ಥಾವರಗಳನ್ನು ಪೂರ್ಣ ಸ್ಥಗಿತಗೊಳಿಸಲು ನಿರ್ಧರಿಸಿವೆ. ಆದರೂ ಭಾರತದಲ್ಲಿ 15 ವರ್ಷಗಳಲ್ಲಿ 15,000 ಕೋಟಿ ರೂ. ವೆಚ್ಚದಲ್ಲಿ 22 ಸ್ಥಾವರ ನಿರ್ಮಾಣದ ಭಾರಿ ಯೋಜನೆ ಹಾಕಿಕೊಂಡಿದ್ದೇಕೆ ? ಶಕ್ತಿ ರಾಷ್ಟ್ರಗಳಿಗೆ ಅಣುಶಕ್ತಿ ಬೇಕಿಲ್ಲ. ಆದರೆ ಅದರ ಸಂಶೋಧನೆಗೆ ಹಾಕಿದ ಹಣ ಮರಳಿ ಪಡೆಯಬೇಕಿದೆ. ಆದ್ದರಿಂದ ಬಡರಾಷ್ಟ್ರಗಳಿಗೆ ತಂತ್ರಜ್ಞಾನ ಮಾರಾಟಕ್ಕೆ ಪ್ರಯತ್ನಿಸುತ್ತಿವೆ.

ಅಣುಶಕ್ತಿ ಬೇಡವಾದರೆ, ಶಕ್ತಿಗಾಗಿ ಮತ್ತೇನು ಮಾಡಬೇಕು ? ಪರಿಸರಕ್ಕೆ ಮನುಷ್ಯನಿಗೆ ಹಾನಿ ಮಾಡದ ಅನೇಕ ಮಾರ್ಗಗಳಿವೆ. ಆದರೆ ಅಂಥ ಕೆಲಸಗಳಲ್ಲಿ ಏಕೆ ಆಸಕ್ತಿ ಇಲ್ಲ ? ಅಣುಸ್ಥಾವರದಂಥ ಭಾರೀ ಯೋಜನೆಯಲ್ಲಿ ಭಾರೀ ಹಣವಿದೆ. ರಾಜಕಾರಣಿ, ಉದ್ಯಮಿ, ವಿಜ್ಞಾನಿ ಎಲ್ಲರೂ ಇದರಿಂದ ಉದ್ಧಾರವಾಗುತ್ತಾರೆ. ವಿಜ್ಞಾನಿಗಳ ತಳುಕು ಪ್ರತಿಷ್ಠೆ ಹೆಚ್ಚುತ್ತದೆ. ಗೌರವ ಡಾಕ್ಟರೇಟ್, ವಿದೇಶೀ ಯಾತ್ರೆ, ಪಂಚತಾರಾ ಸೌಲಭ್ಯ .... .... ಯಾರಿಗುಂಟು, ಯಾರಿಗಿಲ್ಲ. ಪುಟ್ಟ ಯೋಜನೆಗಳಲ್ಲಿ ಏನಿದೆ ಮಣ್ಣು ?

ಇದೊಂದು ಉದಾಹರಣೆ ಗಮನಿಸಿ :

1986, ಏಪ್ರಿಲ್ 26 : ರಷ್ಯಾದ ಚೆರ್ನೋಬಿಲ್ ಒಬ್ಬ ಇಂಜಿನಿಯರು ಸ್ಥಾವರಕ್ಕೆ ಆವಿಯ ಸರಬರಾಜನ್ನು ಒಂದು ನಿಮಿಷ ನಿಲ್ಲಿಸಿದಾಗ, ಸ್ಥಾವರಕ್ಕೆ ಶಕ್ತಿ

ಹೆಚ್ಚಾಯಿತು. ಆ ಒಂದು ನಿಮಿಷದಲ್ಲಿ ಆತ 9 ರಕ್ಷಣಾ ನಿಯಮಗಳನ್ನು ಉಲ್ಲಂಘಿಸಿದ್ದ. ತತ್‌ಕ್ಷಣ 30 ಕಡೆ ಬೆಂಕಿ ಹತ್ತಿಕೊಂಡಿತು. ಭಾರೀ ವಿಕಿರಣ ವಸ್ತುಗಳ ಮೋಡ ಗಗನಕ್ಕೆ ಹಾರಿ 5000 ಕಿ.ಮೀ. ದೂರದ ಐರೋಪ್ಯ ರಾಷ್ಟ್ರಗಳ ಬೆಣ್ಣೆ, ತರಕಾರಿಗಳನ್ನು ನಾಶ ಮಾಡಬೇಕಾಯ್ತು. ತಕ್ಷಣ ಘಟಕದ ಬಾಯಿ ಮುಚ್ಚಿದರೂ ಶೇ. 15ರಷ್ಟು ವಿಕಿರಣ ಹೊರಸೂಸಿ ಪ್ರೀಪ್ಯಾಲ್ ನಗರದಿಂದ 80000 ಜನರನ್ನು ಸ್ಥಳಾಂತರಗೊಳಿಸಲಾಯ್ತು. ಬೆಂಕಿ ಹತ್ತಿಕೊಂಡ 2—3 ಗಂಟೆಗಳೊಳಗೆ ವಿಕಿರಣ ತಡೆಯುವ ಉಕ್ಕಿನ ಮತ್ತು ಸೀಸದ ಕವಚ ಹೊದಿಸಿದ ಹೆಲಿಕಾಪ್ಟರುಗಳಿಂದ 50,00,000 ಕೆ.ಜಿ.ಗಳಷ್ಟು ಮರಳು, ಅಮೃತಶಿಲೆಯ ಚೂರು, ಸೀಸ, ಬೋರಾನ್ ಇತ್ಯಾದಿಗಳನ್ನು ಸುರಿದು ಬೆಂಕಿ ಹರಡದಂತೆ ತಡೆಯ ಬೇಕಾಯಿತು. 16,000 ಕೆ.ಜಿ. ವಿಕಿರಣದ ಕಸವನ್ನು ಬುಲ್‌ಡೋಜರ್‌ಗಳಿಂದ ತೆಗೆದುಹಾಕಿ, ಸ್ಥಾವರದ ಕೆಳಭಾಗ ಕರಗದಂತೆ ಸುರಂಗ ತೋಡಿ ಅತಿ ಶೀತಲ ಸಾರ ಜನಕ ದ್ರವದಿಂದಲೂ ತುಂಬಲಾಯಿತು. ಇಷ್ಟೆಲ್ಲಾ ಆದ ನಂತರವೂ 1,00,000 ಕೆ.ಜಿ. ತೂಕದ ಸ್ಥಾವರದ ತಿರುಳು 2 ತಿಂಗಳಾದರೂ ಉರಿಯುತ್ತಲೇ ಇತ್ತು. ವಿಕಿರಣದ ಸಾಧ್ಯತೆ ಇದ್ದಿದ್ದರಿಂದ, ಸ್ಥಾವರದ ಮೇಲೆ 50 ಮೀ. ಎತ್ತರ ಕಾಂಕ್ರೀಟ್ ಗೋರಿ ಕಟ್ಟಿ ಮುಚ್ಚಲಾಯಿತು.

ಬೆಂಕಿ ಹತ್ತಿದ ಕೆಲವೇ ಗಂಟೆಗಳಲ್ಲಿ 2172 ಬಸ್ಸುಗಳನ್ನೂ 1786 ಲಾರಿ ಗಳನ್ನೂ ಕೂಡಿಸಿ ಸುತ್ತಲಿನ 50 ಗ್ರಾಮಗಳಿಂದ 135000 ಜನರನ್ನು ದೂರಕ್ಕೆ ಸಾಗಿಸಲಾಯಿತು. ಗರ್ಭಿಣಿಯರನ್ನು ಗರ್ಭಪಾತ ಮಾಡಿಸಲಾಯಿತು. ಆಹಾರ ವಸ್ತುಗಳನ್ನು ನಾಶಪಡಿಸಲಾಯಿತು. ಆದರೂ ಮುಂದಿನ ದಶಕದಲ್ಲಿ 10 ಲಕ್ಷ ಜನರಿಗೆ ಕ್ಯಾನ್ಸರ್, ಏಡ್ಸ್ ಮುಂತಾದ ಕಾಯಿಲೆ ಬರಬಹುದೆಂದು ಅಂದಾಜು ಹಾಕಿದ್ದಾರೆ.

ಇದು ರಷ್ಯದಲ್ಲಾಯಿತು. ಇದೇ ಭಾರತದಲ್ಲಾಗಿದ್ದಿದ್ದರೆ? ಊಹಿಸಲೂ ಸಾಧ್ಯವಾಗದ ದುರಂತ, ಸ್ಥಾವರ ಉರಿಯುತ್ತಲೇ ಇರುತ್ತಿತ್ತು, ಕಾಲಾತೀತವಾಗಿ. ಭೂಪಾಲ್ ದುರಂತ ಜ್ಞಾಪಿಸಿಕೊಳ್ಳಿ. ಘಟನೆಯ ನಂತರ 24 ಗಂಟೆಗಳಾದರೂ ಸ್ಥಳೀಯ ಡಾಕ್ಟರುಗಳಿಗೆ ಯಾವ ಔಷಧಿ ಕೊಡಬೇಕೆಂಬ ಮಾಹಿತಿ ಇಲ್ಲ. ನಂತರವೂ ಔಷಧಿಯ ಹಂಚಿಕೆಯಲ್ಲೂ ಭಾರೀ ಗೋಲ್‌ಮಾಲ್. ಅದಕ್ಷತೆ, ಅಸಡ್ಡೆ, ಸೋಮಾರಿತನ, ಕೀಳು ಸ್ವಾರ್ಥ, ಅಸೀಮ ನಿರ್ಲಕ್ಷ್ಯ, ಕಾರ್ಯಹೀನತೆ ತುಂಬಿದಲ್ಲಿ ಏನನ್ನು ನಿರೀಕ್ಷಿಸುತ್ತೀರಿ ? ಭಾರತದಲ್ಲಿ ಅಣುಶಕ್ತಿಯ ಆಹ್ವಾನ, ಮೃತ್ಯುವಿನ ಆಹ್ವಾನವಲ್ಲದೆ ಬೇರೇನೂ ಅಲ್ಲ. ಧೃತರಾಷ್ಟ್ರನ ಅಪ್ಪುಗೆ.

— o —

# ಮುಗಿಸುವ ಮುನ್ನ

ಪ್ರಿಯ ಓದುಗರೆ,

ನಿಮ್ಮ ಕೈಯಲ್ಲಿರುವುದು ಐದನೇ ವರ್ಷಕ್ಕೆ ಕಾಲಿಟ್ಟ ಸಂಚಯದ ಮೊದಲ ಹೆಮ್ಮೆಯ ಸಂಚಿಕೆ, ಅವತ್ತು ಕಾಲೇಜು ಹುಡುಗರಾಗಿದ್ದಾಗ ಉತ್ಸಾಹದಿಂದ ಆರಂಭಿಸಿದ ಈ ಕೆಲಸ ಇಷ್ಟು ಅರ್ಥಪೂರ್ಣವಾಗಬಹುದು ಎಂದು ನಾವುಗಳು ಎಣಿಸಿರಲಿಲ್ಲ. ಒಂದಷ್ಟು ಭಿನ್ನವಾದ ಗಟ್ಟಿಯಾದ ಬರಹಗಳನ್ನ ನೀಡಬಹುದು ಎನ್ನುವ ಆತ್ಮವಿಶ್ವಾಸ ಇವತ್ತು ನಮ್ಮಲ್ಲಿ ಬೆಳೆದಿದೆ. ಹೊಸ ಬರಹಗಾರರನ್ನ ಪ್ರೋತ್ಸಾಹಿಸುವ ಗಟ್ಟಿಗೊಳಿಸುವ ಪ್ರಯತ್ನ ಕೆಲಮಟ್ಟಿಗಾದರೂ ಸಾಧ್ಯವಾಗಿದೆ. ಅನೇಕ ಸ್ನೇಹಿತರು ಸಂಚಯದ ಬಗೆಗೆ ಉತ್ಸುಕತೆ ಕಾತರ ಒಲವುಗಳನ್ನು ತೋರಿದ್ದಾರೆ ಮತ್ತು ಪ್ರೋತ್ಸಾಹಿಸಿದ್ದಾರೆ. ನಮ್ಮ ಸುತ್ತಲಿನ ಎಲ್ಲಾ ನಾಟಕ ಗೋಸುಂಬಿತನಗಳ ಮಧ್ಯೆ ಯಾವ ಗುಂಪುಗಳಿಗೂ ಬೀಳದೆ ಸಂಚಯ ಇನ್ನಷ್ಟು ಮತ್ತಷ್ಟು ಇವತ್ತಿಗೆ ತಕ್ಕಹಾಗೆ ಸ್ಪಂದಿಸಿ ಬೆಳೆಯಬೇಕಾಗಿದೆ, ಬೆಳೆಸಬೇಕಾಗಿದೆ. ಇನ್ನಷ್ಟು ಜವಾಬ್ದಾರಿಯಿಂದ ಈ ವಿಷಯದ ಬಗ್ಗೆ ಚಿಂತಿಸಬೇಕಾಗಿದೆ. ಹತ್ತಾರು ಖರ್ಚುಗಳ ನಡುವೆ ದುಬಾರಿಯಲ್ಲದ ವರ್ಷದ ಚಂದಾ ಹಣ ಕೊಟ್ಟರಷ್ಟೇ ಸಾಕಾಗುವುದಿಲ್ಲ. ಸಂಚಯದಲ್ಲಿನ ಬರಹಗಳು ಅವುಗಳ ನಿಲುವುಗಳನ್ನ ಕುರಿತು ಚರ್ಚೆ ಅಗತ್ಯವಿದೆ. ಆಗ ಮತ್ತಷ್ಟು ಹೊಸ ಸಾಧ್ಯತೆಗಳನ್ನ ನಾವು ಹುಡುಕಬಹುದು. ದಯವಿಟ್ಟು ನಿಮ್ಮ ಬಿಡುವಿನಲ್ಲಿ ಒಂದು ಕಾರ್ಡು ಹಾಕಿ ಅದು ಪತ್ರಿಕೆಯನ್ನ ರೂಪಿಸುವಲ್ಲಿ ಸಹಾಯಕವಾಗುತ್ತದೆ. ಕೆಲವನ್ನಾದರೂ ಪ್ರಕಟಿಸುತ್ತೇವೆ.

ಈ ಸಂಚಿಕೆಯಿಂದ 'ಅನುವಾದ' ಹೊಸ ಅಂಕಣ ಆರಂಭವಾಗಿದೆ. ಇತರೆ ಭಾಷೆಯ ಕವಿತೆಗಳ ಅನುವಾದ ನಮ್ಮ ಓದುಗರಿಗಾಗಿ ಈ ವರ್ಷ ಸಂಗ್ರಹಿಸಿ ಕೊಡಲಾಗುತ್ತದೆ.

ನಮ್ಮ ಅಗತ್ಯ ಬರೀ ನಿಮ್ಮ ಚಂದಾ ಹಣವಷ್ಟೇ ಅಲ್ಲ ; ಸಂಚಯದ ಜೊತೆಗೆ ನಿಮ್ಮ ಉತ್ಸುಕ ಭಾಗವಹಿಸುವಿಕೆಯದ್ದು.

–ಸಂಪಾದಕ

ಸಂಚಯಕ್ಕೆ ಶುಭಾಶಯಗಳೊಂದಿಗೆ

ನಾರಾಯಣ ಎಲೆಕ್ಟ್ರಿಕಲ್ಸ್

ಸಂ. 69, ಶಕ್ತಿ ಗಣಪತಿನಗರ, ಬೆಂಗಳೂರು-560 079

ಮಾಲೀಕರು : ನ. ಉಗ್ರಯ್ಯ

- ಹೊಸ ಧ್ವನಿಗಳ ಸಾಹಿತ್ಯ ಸಂಕಲನ ಸಂಚಯ
- ಹೊಸ ಬರಹಗಾರರ ಪ್ರೋತ್ಸಾಹ – ಸಂವಾದಕ್ಕೆ
- ಸಾಹಿತ್ಯ ಕಲೆಗಳ ಬಗೆಗಿನ ಸ್ಪಂದನಕ್ಕೆ
- ನಿಮ್ಮ ಬರಹಗಳಿಗೆ ಸ್ವಾಗತ
- ನೀವೂ ಚಂದಾದಾರರಾಗಿ ನಿಮ್ಮ ಗೆಳೆಯರನ್ನೂ ಚಂದಾದಾರರನ್ನಾಗಿಸಿ